# ಕರ್ನಾಟಕ ವಿಧಾನ ಪರಿಷತ್ತು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಡಾ|| ತೇಜಸ್ವಿನಿ ಗೌಡ (~~ವಿಧಾನ ಸಭೆಯಿಂದ ಚುನಾಯಿತರಾದವರು~~)**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 322**

**ಉತ್ತರಿಸಬೇಕಾದ ದಿನಾಂಕ : 14.12.2021**

**ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಸಹಕಾರ ಇಲಾಖೆಯ ಗೃಹ ನಿರ್ಮಾಣ ಸಂಘಗಳು ವಿತರಿಸಿರುವ ನಿವೇಶನಗಳ ಸಂಖ್ಯೆ ಎಷ್ಟು; | ಕಳೆದ 03 ವರ್ಷಗಳಲ್ಲಿ ಗೃಹ ನಿರ್ಮಾಣ ಸಹಕಾರ ಸಂಘಗಳು ಒಟ್ಟು 10,613 ನಿವೇಶನಗಳನ್ನು ತನ್ನ ಸದಸ್ಯರಿಗೆ ವಿತರಿಸಿರುತ್ತವೆ. |
| ಆ) | ಇದಕ್ಕಾಗಿ ಸ್ವಾಧೀನ ಪಡಿಸಿಕೊಂಡಿರುವ ಕೃಷಿ ಹಾಗೂ ಕೃಷಿಯೇತರ ಭೂಮಿ ಎಷ್ಟು; | ಮೇಲ್ಕಂಡ ನಿವೇಶನಗಳ ರಚನೆಗಾಗಿ ಒಟ್ಟು 12 ಎಕರೆ ಕೃಷಿ ಜಮೀನನ್ನು ಹಾಗೂ 1045.29 ಎಕರೆ ಕೃಷಿಯೇತರ ಜಮೀನಿನ ವಿಸ್ತೀರ್ಣದಲ್ಲಿ ನಿವೇಶನಗಳನ್ನು ಅಭಿವೃದ್ಧಿಪಡಿಸಲಾಗಿದೆ. |
| ಇ) | ಇದರಲ್ಲಿ ಹಂಚಿಕೆ ಮಾಡಿರುವ ನಿವೇಶನಗಳ ಸಂಖ್ಯೆ ಎಷ್ಟು; 2021-22 ರ ಸಾಲಿನಲ್ಲಿ ಹಂಚಿಕೆ ಮಾಡಬೇಕಾಗಿರುವ ಗುರಿ ಎಷ್ಟು; | ಕಳೆದ 03 ವರ್ಷಗಳಲ್ಲಿ ಗೃಹ ನಿರ್ಮಾಣ ಸಹಕಾರ ಸಂಘಗಳು ಒಟ್ಟು 10,613 ನಿವೇಶನಗಳನ್ನು ತನ್ನ ಸದಸ್ಯರಿಗೆ ವಿತರಿಸಿರುತ್ತವೆ. ಬಡಾವಣೆಗಳನ್ನು ರಚಿಸಿ, ನಿವೇಶನಗಳ ಹಂಚಿಕೆಗೆ ವರ್ಷವಾರು ಗುರಿ ನಿಗಧಿಪಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಕಾರಣವೇನೆಂದರೆ, ಬಡಾವಣೆ ನಿರ್ಮಾಣ ಹಂತದಲ್ಲಿ ಉಂಟಾಗುವ ಭೂ ವ್ಯಾಜ್ಯಗಳು, ವ್ಯಾಜ್ಯಗಳ ಇತ್ಯರ್ಥದಲ್ಲಿ ಆಗುವ ವಿಳಂಬ ಮತ್ತು ವಿವಿಧ ಇಲಾಖೆಗಳಲ್ಲಿ ಅನುಮತಿ ಮತ್ತು ಅನುಮೋದನೆ ಪಡೆಯುವಲ್ಲಿ ಆಗುವ ವಿಳಂಬಗಳಿಂದ ವರ್ಷದಲ್ಲಿ ಇಂತಿಷ್ಟೇ ನಿವೇಶನ ಹಂಚುತ್ತೇವೆ ಎಂದು ಗುರಿ ನಿಗಧಿಪಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. |
| ಈ) | ನಿವೇಶನ ಹಂಚಿಕೆಗೆ ಇರುವ ಮಾನದಂಡಗಳೇನು; ಉಲ್ಲಂಘನೆ ಪ್ರಕರಣಗಳು ಇದ್ದಲ್ಲಿ ಕೈಗೊಂಡಿರುವ ಕ್ರಮಗಳೇನು? | ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 30-ಬಿ ಅವಕಾಶಗಳಂತೆ ಹೊರಡಿಸಿರುವ ಸುತ್ತೋಲೆ ಸಂಖ್ಯೆ: ಸಿಒ 105 ಸಿಎಲ್ಎಂ 2010 ದಿನಾಂಕ:20.11.2010 ರ ರೀತ್ಯಾ ಸದಸ್ಯರು ನಿವೇಶನ ಕೋರಿ ಮುಂಗಡ ಪಾವತಿಸುವ ದಿನಾಂಕಗಳನ್ನಾಧರಿಸಿ ಜೇಷ್ಠತಾ ಪಟ್ಟಿಯನ್ನು ತಯಾರಿಸಿ, ಗೃಹ ನಿರ್ಮಾಣ ಸಹಕಾರ ಸಂಘದವರು ಸಲ್ಲಿಸುವ ನೈಜ ಸದಸ್ಯರ ಹಾಗೂ ನಿವೇಶನ ರೇವಣಿದಾರರ ಜೇಷ್ಠತಾ ಪಟ್ಟಿಯನ್ನು ಇಲಾಖಾಧಿಕಾರಿಗಳಿಂದ ಪರಿಶೀಲನೆಗೆ ಒಳಪಡಿಸಿ, ಇಲಾಖೆಯಿಂದ ಅನುಮೋದನೆ ಪಡೆದು ನಿವೇಶನವನ್ನು ಹಂಚಿಕೆ ಮಾಡಬೇಕಾಗಿರುತ್ತದೆ. ಮಾನದಂಡಗಳನ್ನು ಉಲ್ಲಂಘಿಸಿ ನಿವೇಶನ ಹಂಚಿಕೆ ಮಾಡಿರುವ 12 ಪ್ರಕರಣಗಳು ಕಂಡುಬಂದಿದ್ದು, ಇವುಗಳ ವಿರುದ್ಧ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ. |

| ಕ್ರ. ಸಂ. | ಸಹಕಾರ ಸಂಘದ ಹೆಸರು | ಕೈಗೊಂಡಿರುವ ಕ್ರಮ |
|---|---|---|
| 1 | ವೈಯ್ಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 29 ಸಿ ಕ್ರಮವಿಡಲಾಗಿದೆ. |

| | | | | |
|---|---|---|---|---|
| | | 2 | ಐ.ಟಿ.ಐ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ | ಕಲಂ 29 ಸಿ ಕ್ರಮವಿಡಲಾಗಿದೆ. |
| | | 3 | ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ | ಕಲಂ 29 ಸಿ ಕ್ರಮವಿಡಲಾಗಿದೆ. |
| | | 4 | ಎನ್.ಟಿ.ಐ. ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 29-ಸಿ ರಡಿ ಕ್ರಮವಿಡಲಾಗಿದೆ |
| | | 5 | ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 29-ಸಿ ರಡಿ ಆಡಳಿತ ಮಂಡಲಿಯನ್ನು ರದ್ದುಮಾಡಿ ಆದೇಶಿಸಿದೆ. |
| | | 6 | ಕರ್ನಾಟಕ ಗೌರ್ನಮೆಂಟ್ ಗ್ರೂಪ್ ಡಿ. ನೌಕರರ ಸಹಕಾರ ಸಂಘ ನಿಯಮಿತ. | ಕಲಂ 29-ಸಿ ರಡಿ ಕ್ರಮವಿಡಲಾಗಿದೆ. |
| | | 7 | ಎನ್.ಜಿ.ಇ.ಎಫ್. ಎಂಪ್ಲಾಯೀಸ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 29-ಸಿ ಕ್ರಮವಿಡಲಾಗಿದೆ. |
| | | 8 | ಏರ್ ಕ್ರಾಫ್ಟ್ ಎಂಪ್ಲಾಯೀಸ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 29-ಸಿ ರಡಿ ಕ್ರಮ ಜರುಗಿಸಲಾಗಿದೆ ಹಾಗೂ ಕಲಂ 109 ರಡಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿದೆ. |
| | | 9 | ವಿಜಯ ಬ್ಯಾಂಕ್ ಎಂಪ್ಲಾಯೀಸ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 64 ರ ವಿಚಾರಣಾ ವರದಿ ಸ್ವೀಕೃತವಾಗಿದ್ದು, ಕಲಂ 29 -ಸಿ ರಡಿ ಕ್ರಮವಿಡಲಾಗುವುದು. |
| | | 10 | ಹೆಚ್.ಎಂ.ಟಿ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. | ಕಲಂ 29-ಸಿ ರ ವಿಚಾರಣೆ ಜರುಗುತ್ತಿದೆ. |
| | | 11 | ವಿದ್ಯಾಗಿರಿ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ | ಕಲಂ 29-ಸಿ ರಡಿ ಕ್ರಮವಿಡಲಾಗಿದೆ. |
| | | 12 | ಅಸಾದ್‌ಖಾನ್ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ ಬೆಳಗಾವಿ | ಕಲಂ 29-ಸಿ ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗಿದೆ. |

**ಸಿಒ 55 ಸಿಹೆಚ್ಎಸ್ 2021 (ಇ)**

**(ಎಸ್.ಟಿ.ಸೋಮಶೇಖರ್)**
**ಸಹಕಾರ ಸಚಿವರು**